ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ರಾಜ್ಯದಲ್ಲಿ KFDC ಮೀನುಗಾರಿಕೆ ಅಭಿವೃದ್ಧಿ ನಿಗಮ ನಿಯಮಿತ ಕುರಿತು

ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು) -

55 (310) ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) KFDC ನ್ನು ರಾಜ್ಯದಲ್ಲಿ ಯಾವಾಗ ಪ್ರಾರಂಭಿಸಲಾಯಿತು ; KFDC ನ ಕಾರ್ಯಗಳು, ವ್ಯಾಪ್ತಿ ಮತ್ತು ಪ್ರಾರಂಭಿಸಿರುವ ಉದ್ದೇಶಗಳೇನು ; (ವಿವರ ನೀಡುವುದು)

(ಆ) ಈ ನಿಗಮದಡಿ ಒಟ್ಟು ಎಷ್ಟು ಘಟಕಗಳು ಕಾರ್ಯ ನಿರ್ವಹಿಸುತ್ತಿವೆ ; ಕಳೆದ ಮೂರು ವರ್ಷಗಳಿಂದ ಲಾಭ ನಷ್ಟ ಅನುಭವಿಸುತ್ತಿರುವ ಘಟಕಗಳು ಯಾವುವು; (ನಿಗಮವು ಘಟಕವಾರು ಲಾಭ ನಷ್ಟದ ವಿವರಗಳನ್ನು ನೀಡುವುದು) ನಷ್ಟ ಅನುಭವಿಸುತ್ತಿದ್ದಲ್ಲಿ ಕಾರಣಗಳೇನು ; ನಷ್ಟ ಅನುಭವಿಸುತ್ತಿರುವ ಘಟಕಗಳನ್ನು ಲಾಭದತ್ತ ಕೊಂಡೊಯ್ಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಇ) ಈ ನಿಗಮದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಒಟ್ಟು ನೌಕರರ ಸಂಖ್ಯೆ ಎಷ್ಟು; ಅವರಲ್ಲಿ ಖಾಯಂ, ಹಂಗಾಮಿ, ದಿನಗೂಲಿ, ತಾತ್ಕಾಲಿಕ ಹಾಗೂ ಎರವಲು ಸೇವೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ ಎಷ್ಟು ; (ಹುದ್ದೆಯ ವಿವರದೊಂದಿಗೆ ಮಂಜೂರಾತಿ, ಕಾರ್ಯನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಬಗ್ಗೆ ಮಾಹಿತಿ ನೀಡುವುದು)

(ಈ) ರಾಜ್ಯದಲ್ಲಿ ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸಲು ನಿಗಮದ ವತಿಯಿಂದ ಸರ್ಕಾರ ಕೈಗೊಂಡಿರುವ ಯೋಜನೆಗಳು ಯಾವುವು ; ಈ ಯೋಜನೆಗಳ ಬಗ್ಗೆ ಸಾರ್ವಜನಿಕರಿಗೆ ಅರಿವು ಮೂಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ? (ವಿವರ ನೀಡುವುದು)